ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಕಾಮಗಾರಿ ಮಾಡದೇ ಅನುದಾನ ದುರ್ಬಳಕೆ ಆಗಿರುವುದರ ಬಗ್ಗೆ ಸೂಕ್ತ ತನಿಖೆ ಮಾಡುವ ಕುರಿತು

ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

951 (1075) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಾರವಾರ ಜಿಲ್ಲೆಯ ವ್ಯಾಪ್ತಿಯಲ್ಲಿ 2015-16ನೇ ಸಾಲಿನಿಂದ 2019-20ನೇ ಸಾಲಿನವರೆಗೆ ಕೆನರಾ ವೃತ್ತದ ಹಳಿಯಾಳ ವಿಭಾಗಕ್ಕೆ ಬಂದಿರುವ ಅನುದಾನ ಎಷ್ಟು; ಹಾಗೂ ಸದರಿ ಅನುದಾನದಿಂದ ಕೈಗೊಂಡ ಕಾಮಗಾರಿಗಳು ಯಾವುವು; ವಿವರ ಹಾಗೂ ಆಡಿಟ್ ಪ್ರತಿಯೊಂದಿಗೆ ನೀಡುವುದು ; (ಕಾಮಗಾರಿಯ ಅಂದಾಜು ಪ್ರತಿ, ಬಿಲ್ ಪ್ರತಿ, ಎಂ.ಬಿ. ಪ್ರತಿ ಹಾಗೂ ಕಾಮಗಾರಿಯ ಫೋಟೋ ಸಮೇತ ತಾಲ್ಲೂಕುವಾರು / ಜಿಲ್ಲಾವಾರು ಮಾಹಿತಿ ನೀಡುವುದು)

(ಆ) ಸದರಿ ಕಾಮಗಾರಿಯಲ್ಲಿ ಬಹಳಷ್ಟು ಅವ್ಯವಹಾರಗಳು ನಡೆದಿರುವುದು ಕಂಡು ಬಂದಿದ್ದು, ಸರ್ಕಾರದಿಂದ ಬಂದಿರುವ ಅನುದಾನ ದುರುಪಯೋಗವಾಗಿದ್ದು, ಈ ಬಗ್ಗೆ ಸಾರ್ವಜನಿಕರಿಂದ ದೂರುಗಳು ಬಂದಿರುವುದರಿಂದ ಸಂಬಂಧಿಸಿದ ಅಧಿಕಾರಿಯ ಮೇಲೆ ಸೂಕ್ತ ತನಿಖೆ ನಡೆಸಿ ಕ್ರಮ ಜರುಗಿಸಲಾಗುವುದೇ; (ವಿವರ ನೀಡುವುದು)

(ಇ) ಕೆಲವೊಂದು ವಲಯದಲ್ಲಿ ಬಂದಿರುವ ಅನುದಾನದಲ್ಲಿ ಅಂದಾಜು ಪತ್ರಿಕೆ ತಯಾರಿಸಿ ಮಂಜೂರು ಮಾಡಿಸಿಕೊಂಡಿದ್ದು, ಕೆಲಸ ಸರಿಯಾಗಿ ನಡೆಯದೆ ಶೂನ್ಯವೆಂದು ಸಾರ್ವಜನಿಕರಿಂದ ತಿಳಿದು ಬಂದಿದ್ದು, ಈ ಬಗ್ಗೆ ಲೋಕಾಯುಕ್ತರಿಂದ ಅಥವಾ ಬೇರೆ ಯಾವುದೇ ಮೂಲದಿಂದ ಸೂಕ್ತ ತನಿಖೆ ಮಾಡಿಸಲಾಗುವುದೇ?